ಡಾ॥ ಜಿ.ಎಸ್. ದೀಕ್ಷಿತ್

# ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆಯ ಅವಶ್ಯಕತೆ.

ಐತಿಹಾಸಿಕ ಸಂಶೋಧನೆಯಿಂದ ದೊರಕುವ ಫಲ ಅನೇಕ ವೇಳೆ ನಮ್ಮ ದೈನಂದಿನ ಜೀವನಕ್ಕೆ ನೇರವಾಗಿ ಸಂಬಂಧಿಸಿರುವುದಿಲ್ಲ. ಆದ್ದರಿಂದ ಸಾರ್ವಜನಿಕರಿಗೆ ಇಂತಹ ಸಂಶೋಧನೆ ವಿದ್ವಾಂಸರಿಗೆ ಸಂಬಂಧಿಸಿದ್ದು, ತಮಗೂ ಅದಕ್ಕೂ ಸಂಬಂದವಿಲ್ಲವೆಂದೆನಿಸಿದರೆ ಆಶ್ಚರ್ಯವಿಲ್ಲ. ಆದರೆ, ಕೆರೆಗಳ ಬಗೆಗಿನ ಸಂಶೋಧನೆ ಸಾರ್ವಜನಿಕರಿಗೆ ನೇರವಾಗಿ ಸಂಬಂಧಿಸಿದ್ದನ್ನು ಒತ್ತಿ ಹೇಳಬೇಕಾದ್ದಿಲ್ಲ. ಮಹಾಪೂರಗಳ ಮತ್ತು ನೀರಿನ ಬರಗಳ ನಿಯಂತ್ರಣದಲ್ಲಿ ಕೆರೆಗಳ ಪಾತ್ರ ಮಹತ್ವವಾದದ್ದು.

ಈ ಸಂಶೋಧನೆ ಅವಶ್ಯಕವೆನ್ನುವ ಚರ್ಚೆ ಚಿತ್ರದುರ್ಗದಲ್ಲಿ ನಡೆಯುವುದರಲ್ಲಿ ಔಚಿತ್ಯವಿದೆ. ಚಿತ್ರದುರ್ಗದ ಹತ್ತಿರವಿರುವ ಚಂದ್ರವಳ್ಳಿಯಲ್ಲಿ ಕರ್ನಾಟಕ ಇತಿಹಾಸದಲ್ಲಿ ಮೊಟ್ಟಮೊದಲನೆ ಕೆರೆಯಿತ್ತು. ಇದಕ್ಕೂ ಹಿಂದಿನದೆನ್ನ ಬಹುದಾದ ಕೆರೆಗಳು ಬನವಾಸಿ ಮತ್ತು ಆದವಾನಿಗಳ ಹತ್ತಿರವಿದ್ದವೆನ್ನುವುದಕ್ಕೆ ದಾಖಲೆಗಳಿದ್ದರೂ, ಆ ಕೆರೆಗಳು ಎಲ್ಲಿದ್ದವೆನ್ನುವುದಕ್ಕೆ ಕುರುಹುಗಳಿಲ್ಲ. ಚಂದ್ರವಳ್ಳಿ ಕೆರೆಯ ದಂಡೆಯಮೇಲೆ ಆ ಕೆರೆಯನ್ನು ಕದಂಬರ ಮಯೂರ ಶರ್ಮನು (ಸು.350ರಲ್ಲಿ) ಕಟ್ಟಿಸಿದನೆನ್ನುವ ಶಾಸನವಿರುವುದರಿಂದ, ಇದು ಕರ್ನಾಟಕದಲ್ಲಿ ಅತ್ಯಂತ ಪುರಾತನ ಕೆರೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಇನ್ನೊಂದು ಔಚಿತ್ಯವೆಂದರೆ, ಹಾಳಾದಕೆರೆಗಳನ್ನು ಹೇಗೆ ಉಪಯೋಗಿಸಬಹುದೆಂಬುದನ್ನು ನಮ್ಮ ತಂತ್ರ ಜ್ಞಾನಿಗಳು ಚಂದ್ರವಳ್ಳಿಕೆರೆಯ ಪುನರುತ್ಥಾನ ಮಾಡಿ ಇತ್ತೀಚೆಗೆ ತೋರಿಸಿ ಕೊಟ್ಟಿದ್ದಾರೆ. ಕೊನೆಯ ಔಚಿತ್ಯವೆಂದರೆ ಗುಡ್ಡಗಳ ಮೇಲೆ ಬಿದ್ದನೀರನ್ನು ಕೆರೆಗಳಲ್ಲಿ ಸಂಗ್ರಹಿಸಿ ಅದನ್ನು ಕೃಷಿಗೂ ಮತ್ತು ಕುಡಿಯುವುದಕ್ಕೂ ಉಪಯೋಗಿಸಬಹುದೆನ್ನುವುದನ್ನು ಇವತ್ತಿಗೂ ಸ್ವಲ್ಪಮಟ್ಟಿಗೆ ಚಿತ್ರದುರ್ಗದಲ್ಲಿ ನೋಡಬಹುದು. ಈ ಔಚಿತ್ಯವನ್ನು ಕುರಿತು ಕೊನೆಯಲ್ಲಿ ಹೇಳಿದ್ದೇನೆ.

ನಾವು ಸಂಶೋಧನೆಯನ್ನು ಆರಂಭಿಸುವ ಮೊದಲು ಯಾರಾದರೂ ಕೇಳಬಹುದು, ನಾವಿರುವುದು ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿ. ಈಗ ವಿಜ್ಞಾನ–ತಂತ್ರಜ್ಞಾನ ಅಪಾರವಾಗಿ ಬೆಳೆದಿದೆ. ಅತ್ಯಾಧುನಿಕ ರೀತಿಯಲ್ಲಿ ನದಿಗಳಿಗೆ ಅಣೆಕಟ್ಟುಗಳನ್ನು ಕಟ್ಟಿ ಲಕ್ಷಾಂತರ ಎಕ್ರೆ ಭೂಮಿಗೆ ನೀರಾವರಿಯನ್ನು ಒದಗಿಸಬಹುದು. ಬಹಳ ದೊಡ್ಡಕೆರೆಗಳು ನೂರಾರು ಎಕ್ರೆ ಭೂಮಿಗೆ ಮಾತ್ರ ಉಪಯೋಗವಾಗುವುವು. ಆದ್ದರಿಂದ ಇಂದಿಗೆ ಅವುಸರಿಯಲ್ಲವೆಂದು ವಾದಿಸಬಹುದು. ಇದಕ್ಕೆ ಉತ್ತರ, ಭಾರೀಜಲಾಶಯಗಳನ್ನು ಎಲ್ಲಾ ಕಡೆಯಲ್ಲಿಯೂ ಕಟ್ಟಲು ಸಾಧ್ಯವಿಲ್ಲ. ಅಂತಹ ಸ್ಥಳಗಳಲ್ಲಿ ಕೆರೆಗಳು ಅನಿವಾರ್ಯ; ಕೆರೆಗಳ ಪರ ಇರುವವರು ಭಾರೀ ಅಣೆಕಟ್ಟುಗಳ ಶತ್ರುಗಳಲ್ಲ. ಎರಡಕ್ಕೂ ಬೇರೆಬೇರೆ ಸ್ಥಾನವಿದೆ. ಕೆರೆಗಳ ಅವಶ್ಯಕತೆಯನ್ನು ಒಪ್ಪಿಕೊಂಡರೂ ಹಳೆಕೆರೆಗಳನ್ನು ಕಟ್ಟಿಕೊಂಡು ಏನು ಮಾಡಬೇಕು, ಹೊಸಕೆರೆಗಳನ್ನು ಹೊಸರೀತಿಯಲ್ಲಿ ಕಟ್ಟಿದರೆ ಒಳ್ಳೆಯದಲ್ಲವೆ ಎನ್ನಬಹುದು. ಹಳೆಯ ಮೈಸೂರಿನಲ್ಲಿ ಮುಖ್ಯ ಎಂಜನಿಯರ್ ಆಗಿದ್ದು ಹಳೆಯ ಕೆರೆಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿದ ತಜ್ಞ ಸ್ಯಾಂಕಿ (Sankey). ಈತನ ಹೆಸರಿನಲ್ಲಿ ಇವತ್ತಿಗೂ ಒಂದು ಕೆರೆ ಬೆಂಗಳೂರಿನಲ್ಲಿದೆ. ಈ ತಜ್ಞನ ಪ್ರಕಾರ ನಮ್ಮ ಪೂರ್ವಜರು ಎಲ್ಲೆಲ್ಲಿ ಕೆರೆಯನ್ನು ಕಟ್ಟಲೂ ಸಾಧ್ಯವೋ ಅಲ್ಲೆಲ್ಲಾ ಕೆರೆಗಳನ್ನು ಕಟ್ಟಿಬಿಟ್ಟಿದ್ದಾರೆ. ಹೊಸಕೆರೆಗಳಿಗೆ ಸ್ಥಳವನ್ನು ಹುಡುಕುವುದು ದುಸ್ತರ. ಒಂದು ವೇಳೆ ಸ್ಥಳವಿದೆಯೆಂದು ಹೊಸಕೆರೆಯನ್ನು ಕಟ್ಟಲಾರಂಭಿಸಿದರೆ ಅದರಿಂದ, ಈಗಿರುಕವ ಹಳೆಯ ಕೆರೆಗಳಲ್ಲಿ ನೀರುಸೇರುವುದಕ್ಕೆ ತಡೆಯುಂಟಾಗಬಹುದೆಂದು ಸ್ಯಾಂಕಿಯು ಅಭಿಪ್ರಾಯ ಪಟ್ಟಿದ್ದಾನೆ.

ಹಳೆಯ ಕೆರೆಗಳ ಪುನರುತ್ಥಾನ ಮಾಡುವ ಮೊದಲು ಅವುಗಳನ್ನು ಕಟ್ಟಿದ ರೀತಿಯನ್ನು ನಾವು ಅಭ್ಯಾಸ ಮಾಡಬೇಕು, ಏಷ್ಟೋಸಲ ಆ ತಂತ್ರಜ್ಞಾನ ಇಂದಿಗೂ ಉಪಯೋಗವಾಗುವ ಸಂಭವವಿದೆ. ಪಾಂಡ್ಯರು ಕಟ್ಟಿದ ಕಾಲುವೆಯನ್ನು ದುರಸ್ತು ಮಾಡಲು ಹೊರಟ ಹಾರ್ಸ್ಲಿ (Horsly) ಯೆನ್ನುವ ಎಂಜನಿಯರನು, ಹಿಂದಿನವರು ಕಟ್ಟಿದರೀತಿಯನ್ನೇ ಅನುಸರಿಸುವುದರಲ್ಲಿ ತನಗೆ ಬಹಳ ಸಂತೋಷವಾಯಿತೆಂದು

ಒಪ್ಪಿಕೊಂಡಿದ್ದಾನೆ. "I have no hesitation in saying that it has been an un mixed pleasure to me, from a professional pointing view, to merely follow the original constructors of the Pandyan Canal".

ತಂತ್ರಜ್ಞಾನ ಒಂದೇ ಅಲ್ಲದೆ ನಮ್ಮ ಹಿಂದಿನವರು ಕೆರೆಗಳನ್ನು ನಿರ್ವಹಿಸುತ್ತಿದ್ದ ವಿಧಾನವು ನಮಗೆ ಅವಶ್ಯವಾಗಬಹುದು. ಈ ನಿರ್ವಹಣೆಯನ್ನು ಪಂಚಾಯಿತಿಗಳು ಮಾಡುತ್ತಿದ್ದವು. ಈಚೆಗೆ ಸರ್ಕಾರದವರು ಈ ನಿರ್ವಹಣೆಯನ್ನು ವಹಿಸಿಕೊಂಡು ತಮ್ಮಿಂದ ಸಣ್ಣಕೆರೆಗಳ ನಿರ್ವಹಣೆ ಸಾಧ್ಯವಿಲ್ಲ, ಅದನ್ನು ಸ್ಥಳೀಯರು ಮಾಡಿದರೆ ಒಳ್ಳೆಯದೆನ್ನುವ ಅಭಿಪ್ರಾಯಕ್ಕೆ ಬಂದಿದ್ದಾರೆ. 1884ರಲ್ಲಿ ಮೈಸೂರಿನ ದಿವಾನ್ ಸರ್.ಎಸ್.ಶೇಷಾದ್ರಿ ಅಯ್ಯರ್ ಇವರು ಇದನ್ನು ಹೀಗೆ ಹೇಳಿದ್ದಾರೆ. "Any reform in our tank system must start with a clear recognition of the fact that it is beyond the ability of Government to undertake the repairs and maintenance of all tanks in the province". ಆದರೆ ಈ ಕೆಲಸವನ್ನು ನಮ್ಮ ಪಂಚಾಯತಿಗಳು ಸಮರ್ಥವಾಗಿ ನಿರ್ವಹಿಸುತ್ತಿದ್ದವೆನ್ನುವುದಕ್ಕೆ ಆ ಕೆರೆಗಳು ನೂರಾರು ವರ್ಷ ಸುಸ್ಥಿತಿಯಲ್ಲಿ ಇದ್ದುದ್ದೇ ಸಾಕ್ಷಿ.

ಮೇಲೆ ಹೇಳಿದ್ದನ್ನೆಲ್ಲಾ ಒಪ್ಪಿಕೊಂಡರೂ, ಈ ಸಂಶೋಧನೆ ಈಗಲೆ ಯಾಕೆ ಮಾಡಬೇಕು, ಸ್ವಲ್ಪ ನಿಧಾನವಾಗಿ ಮಾಡಿದರೆ ಆಗದೆ ಎಂದು ಕೇಳಿದರೆ, ಅದಕ್ಕೆ ಉತ್ತರ, ಈ ಸಂಶೋಧನೆ ಎಷ್ಟು ಶೀಘ್ರವಾಗಿ ನಡೆದರೆ ಅಷ್ಟು ಒಳ್ಳೆಯದು. ಯಾಕೆಂದರೆ, ಕುಡಿಯುವ ನೀರಿನ ಅಭಾವ, ಬೆಳೆಯುತ್ತಿರುವ ಜನಸಂಖ್ಯೆಗೆ ಅಹಾರಧಾನ್ಯ ಬಟ್ಟೆಯನ್ನು ಒದಗಿಸುವುದು ಇದಕ್ಕೆಲ್ಲಾ ನೀರಾವರಿಯನ್ನು ಹೆಚ್ಚಿಸುವುದು ಒಂದೇ ಮಾರ್ಗ. ಇದನ್ನು ಕಂಡುಕೊಂಡು ಸರ್ಕಾರದವರು ಸಾವಿರಾರು ಕೊಳವೆ ಬಾವಿಗಳನ್ನು ತೋಡುತ್ತೇವೆ ಎನ್ನುತ್ತಾರೆ. ಆದರೆ ಈ ಕೊಳವೆ ಬಾವಿಗಳಿಗೆ ಮತ್ತು ಮಾಮೂಲು ಬಾವಿಗಳಿಗೆ ನೀರು ಎಲ್ಲಿಂದ ಬರುತ್ತದೆನ್ನುವುದನ್ನು ಆಲೋಚಿಸಿದರೆ, ಅದಕ್ಕೆ ಕೆರೆಗಳಿಂದಲೇ, ನೀರು ಬರುತ್ತದೆ. 'No tanks, no wells' ಎನ್ನುವ 1902ರ Irrigation Commission ವರದಿಯಲ್ಲಿರುವ ವಾಕ್ಯ ಅಕ್ಷರಶಃ ನಿಜ. ಇದನ್ನೆಲ್ಲಾ ಮನಗಂಡು, ಕೆಲವು ವಿದೇಶಿ ಸೇವಾಸಂಸ್ಥೆಗಳು ಕೆರೆಗಳ ಬಗೆಗಿನ ಸಂಶೋಧನೆಗೆ ಆದ್ಯತೆಯನ್ನು ಕೊಟ್ಟಿವೆ. ಹೊರಗಿನ ಸಂಸ್ಥೆಗಳು ಇಷ್ಟು ಆಸಕ್ತಿಯನ್ನು ತೋರಿಸುತ್ತಿರುವ ವಿಷಯದಲ್ಲಿ ನಾವು ಸುಮ್ಮನಿರುವುದು ಸರಿಯಲ್ಲ.

ಚಿತ್ರದುರ್ಗದಲ್ಲಿ ಅತ್ಯಂತ ಪುರಾತನ ಕೆರೆ ಇದ್ದುದಲ್ಲದೆ, ನಮ್ಮ ಪೂರ್ವ ಸಂಪ್ರದಾಯದ ರೀತಿಯಲ್ಲಿ ಕಟ್ಟಕಡೆಗೆ ಕಟ್ಟಿದ ಕೆರೆಗಳ ಜಾಲವು ಇತ್ತು. ಇದಕ್ಕೆ ಕಾರಣರಾದವರು ಬಹುಮಟ್ಟಿಗೆ ಚಿತ್ರದುರ್ಗದ ಪಾಳೆಯಗಾರರು. ಇದರಿಂದಾಗಿ ಚಿತ್ರದುರ್ಗದಲ್ಲಿ ಮೊನ್ನೆ ಮೊನ್ನೆಯವರೆಗು ಕುಡಿಯುವ ನೀರಿನ ಒಳ್ಳೆಯ ವ್ಯವಸ್ಥೆ ಇತ್ತು. ಎರಡು ಗುಡ್ಡಗಳ ಮೇಲೆ ಬಿದ್ದನೀರನ್ನು ಹಂತ ಹಂತವಾಗಿ ಕೆಳಗೆ ತೆಗೆದುಕೊಂಡು ಬರಲಾಗಿತ್ತು. ಮೊದಲಿನ ಗುಡ್ಡ ಜೋಗಿಮಟ್ಟಿ. ಈ ಗುಡ್ಡದ ಮೇಲೆ ಬಿದ್ದನೀರನ್ನು ದೊಡ್ಡಣ್ಣನ ಕೆರೆ, ಅದು ತುಂಬಿದ ಮೇಲೆ ತಿಮ್ಮಣ್ಣನ ಕೆರೆ ಮತ್ತು ಸಣ್ಣಕೆರೆ ಮತ್ತು ಅವು ತುಂಬಿದ ಮೇಲೆ ದಬದಬ ಮತ್ತು ವಡ್ಡು ಎನ್ನುವ ಕೆರೆಗಳಿಗೆ ತರಲಾಗುತ್ತಿತ್ತು, ಈ ನೀರನ್ನು ವ್ಯವಸಾಯಕ್ಕೂ ಮತ್ತು ಕುಡಿಯುವುದಕ್ಕೂ ಉಪಯೋಗಿಸಲಾಗುತ್ತಿತ್ತು. ಈ ಎಲ್ಲಾ ಕೆರೆಗಳು ತುಂಬಿದ ಮೇಲೆ ನೀರು ಕೋಟೆಯ ಸುತ್ತಲ ಕಂದಕಕ್ಕೆ ಬಂದು ಅದನ್ನು ತುಂಬುತಿತ್ತು. ಹೀಗೆ ಗುಡ್ಡದ ಮೇಲೆ ಬಿದ್ದ ಮಳೆಯ ನೀರಿನ ಒಂದು ಹನಿಯೂ ಪೋಲಾಗುತ್ತಿರಲಿಲ್ಲ. ಇನ್ನೊಂದು ಗುಡ್ಡವಾದ ಮೇಲದುರ್ಗ ಅಥವಾ ಕೋಟೆಯ ಮೇಲುಭಾಗದ ಮೇಲೆ ಬಿದ್ದ ನೀರು ಕ್ರಮವಾಗಿ ಗೋಪಾಲಕೃಷ್ಣದೇವರ ಹೊಂಡ, ಅಕ್ಕತಂಗಿಯರ ಹೊಂಡ, ಸಿಹಿನೀರಿನ ಹೊಂಡಗಳನ್ನು ತುಂಬಿ ಕೊನೆಯದಾಗಿ ಭೂಮಿಯೊಳಗೆ ಮಾಡಿದ ಕಾಲುವೆ ಮುಖಾಂತರ ಸಂತೆ ಹೊಂಡವನ್ನು ಸೇರಿ ಊರಿನವರಿಗೆ ನೀರನ್ನು ಒದಗಿಸುತ್ತಿತ್ತು. ಹೀಗೆ ಹಿಂದಿನ ಕೆರೆಗಳ ಬಗೆಗಿನ ಸಂಶೋಧನೆಯು ಇತರ ಸಂಶೋಧನೆಯಂತೆ ನಮ್ಮ ಪೂರ್ವಜರ ಜನಜೀವನದ ಕೆಲವು ಅಂಶಗಳನ್ನು ತೋರಿಸುವ ಜತೆಗೆ, ಇಂದಿನ ಕಾಲದ ಜನರಿಗೆ ಪ್ರವಾಹವನ್ನು ಮತ್ತು ನೀರಿನ ಬರವನ್ನು ನಿಯಂತ್ರಿಸುವಲ್ಲಿ ಸಹಾಯಕವಾಗುವುದು.

**ಆಧಾರಗಳ ಬಗ್ಗೆ ಟಿಪ್ಪಣಿ.**

ಕೆರೆಗಳ ಅಧ್ಯಯನಕ್ಕೆ ಮುಖ್ಯ ಆಧಾರವೆಂದರೆ ಶಾಸನಗಳು. ಭಾರತದಲ್ಲಿಯ ಪ್ರಮುಖ ಕೆರೆಗಳ

ಉಲ್ಲೇಖವಿರುವ ಎಲ್ಲಾ ಶಾಸನಗಳ ಪಟ್ಟಿ ಮತ್ತು ಅವು ಪ್ರಕಟವಾಗಿರುವ ಸ್ಥಳ – ಈ ಮಾಹಿತಿಯನ್ನೊಳಗೊಂಡ ಏಕೈಕ ಪುಸ್ತಕ "Irrigation through the Ages", CPWDಯವರ ಪ್ರಕಟಣೆ. ಕೆರೆಗಳನ್ನು ಏಕೆ ಮತ್ತು ಹೇಗೆ ಕಟ್ಟಬೇಕೆಂಬುದರ ಬಗೆಗೆ ನಮ್ಮ ಪೂರ್ವಜರು ಗ್ರಂಥಗಳನ್ನು ಬರೆದಿದ್ದಾರೆ. ಇಂತಹ ಗ್ರಂಥಗಳಲ್ಲಿ ಮುಖ್ಯವಾದದ್ದು ಪರಾಶರರ ಕೃಷಿಸೂಕ್ತ (10ನೇ ಶತಮಾನ) ಇಂತಹ ಗ್ರಂಥಗಳ ಪಟ್ಟಿ ಮತ್ತು ಪರಾಮರ್ಶೆ ಎಸ್.ಜಿ.ರಾಯ ಚೌಧರಿಯವರರಿಂದ, ಸಂಪಾದಿತವಾದ Agriculture in Ancient India ಈ ಪುಸ್ತಕದಲ್ಲಿದೆ. ಈ ಪುಸ್ತಕವನ್ನು Indian Council of Agricultural Research, New Delhi, ಇವರು ಪ್ರಕಟಿಸಿದ್ದಾರೆ.

ಕರ್ನಾಟಕದ ಕೆರೆಗಳ ಬಗೆಗೆ ವಿಸ್ತೃತವಾಗಿ ಬರೆದಿರುವವರು ಡಾ.ಜಿ.ಆರ್.ಕುಪ್ಪಸ್ವಾಮಿ. ಇವರ ಲೇಖನಗಳು Quarterly Journal of the mythic Society ಯಲ್ಲಿ ಸುಮಾರು 10 ವರ್ಷಗಳಿಂದೀಚೆಗೆ ಪ್ರಕಟವಾಗುತ್ತಿದೆ. ಇದೇ ಅವಧಿಯಲ್ಲಿ ಅವರ ಒಂದೆರಡು ಲೇಖನಗಳು ಕರ್ನಾಟಕ ಯೂನಿವರ್ಸಿಟಿ ಜರ್ನಲ್‌ನಲ್ಲಿಯೂ ಬಂದಿದೆ. ಕನ್ನಡದಲ್ಲಿ ಕೆರೆಗಳ ಬಗೆಗೆ ಡಾ.ಚಿದಾನಂದ ಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ದಲ್ಲಿ ಉತ್ಕೃಷ್ಟವಾದ ಮಾಹಿತಿ ಇದೆ. ಸ್ಕ್ಯಾಂಕಿಯಕವರ ಅಭಿಪ್ರಾಯ ಹಯವದನ ರಾಯರ ಮೈಸೂರ್ ಗೆಜೆಟಿಯರ್ ಮೂರನೇಯ ಸಂಪುಟದ 157ನೆಯ ಪುಟದಲ್ಲಿದೆ. ಹಾರ್ಸ್ಲಿಯವರ ಅಭಿಪ್ರಾಯ ಎ.ಅಪ್ಪಾದೊರೈಯವರ 'ಎಕನಾಮಿಲ್ ಕಂಡಿಷನ್ಸ್ ಇನ್ ಸೌತ್ ಇಂಡಿಯಾ' ಸಂಪುಟ 1, ಪುಟ 211ರಲ್ಲಿದೆ. ಶೇಷಾದ್ರಿ ಅಯ್ಯರ್ ಅವರ ಅಭಿಪ್ರಾಯ ಅವರನ್ನು ಕುರಿತು ಶ್ರೀ ಎನ್.ಎಸ್.ಚಂದ್ರಶೇಖರ್ ಅವರು ಬರೆದ ಪುಸ್ತಕದಲ್ಲಿದೆ. ಚಿತ್ರದುರ್ಗದ ಕೆರೆಗಳ ವಿಷಯ ಶ್ರೀ ಲಕ್ಷ್ಮಣ ತೆಲಗಾದಿ ಮತ್ತು ಕೆ.ವೆಂಕಣ್ಣಾಚಾರ್ ಸಂಪಾದಿಸಿದ ಐತಿಹಾಸಿಕ ಚಿತ್ರದುರ್ಗ ದಲ್ಲಿ ಶ್ರೀ ಟಿ.ಎನ್.ಗಂಡುಗಲಿಯವರ ಚಿತ್ರದುರ್ಗದ ಜಲಾಶಯಗಳು" ಎನ್ನುವ ಲೇಖನದಲ್ಲಿವೆ.